

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1126 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಪ್ರದೀಪ್ ಶೆಟ್ಟರ್ |
| ಉತ್ತರಿಸುವ ದಿನಾಂಕ | : | 25-02-2022 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡ, ಗದಗ, ಹಾವೇರಿ ಜಿಲ್ಲೆಗಳಿಗೆ ಗ್ರಾಮೀಣ ಭಾಗದ ಮಕ್ಕಳಿಗೆ ವ್ಯಾಸಂಗಕ್ಕಾಗಿ ವಸತಿ ನಿಲಯಗಳ ನಿರ್ಮಾಣ ಮಾಡಲು ಬಿಡುಗಡೆಯಾಗಿರುವ ಅನುದಾನವೆಷ್ಟು; | ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಬಾಡಿಗೆ ಕಟ್ಟಡಗಳಲ್ಲಿ ನಡೆಸುತ್ತಿರುವ ಪರಿಶಿಷ್ಟ ಜಾತಿಯ ಸರ್ಕಾರಿ ವಿದ್ಯಾರ್ಥಿ ನಿಲಯಗಳಿಗೆ ಕಳೆದ ಮೂರು ವರ್ಷಗಳಲ್ಲಿ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ಕೈಗೊಳ್ಳಲು ಮಂಜೂರಾತಿ ನೀಡಲಾಗಿರುತ್ತದೆ. ಕಾಮಗಾರಿಗಳ ಪ್ರಗತಿ ವಿವರ ಈ ಕೆಳಕಂಡಂತಿರುತ್ತದೆ. |

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಜಿಲ್ಲೆ | ವರ್ಷ | ವಿದ್ಯಾರ್ಥಿ ನಿಲಯದ ವಿವರ | ಅಂದಾಜು ಮೊತ್ತ | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|---|
| 1. | ಧಾರವಾಡ | 2020-21 | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಉಣಕಲ್ ಕ್ರಾಸ್, ಹುಬ್ಬಳ್ಳಿ ತಾಲ್ಲೂಕು. | 439.00 | ತಳಪಾಯದ ಮಣ್ಣು ಅಗೆಯುವ ಕಾಮಗಾರಿ ಪ್ರಗತಿಯಲ್ಲಿದೆ. |
| 2. | | | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ದುಮ್ಮವಾಡ, ಕಲಘಟಗಿ ತಾಲ್ಲೂಕು. | 298.00 | ಪ್ಲಿಂತ್ ಕಾಮಗಾರಿ ಪ್ರಗತಿಯಲ್ಲಿದೆ. |
| 3. | ಗದಗ | 2018-19 | ಸರ್ಕಾರಿ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ಲಕ್ಷ್ಮೇಶ್ವರ, ಶಿರಹಟ್ಟಿ ತಾಲ್ಲೂಕು. | 358.00 | ನೆಲ ಮಹಡಿ ಇಟ್ಟಿಗೆ ಕಟ್ಟಡ, ಮೊದಲನೇ ಮಹಡಿ ಕಾಲಂ ಕಾಮಗಾರಿ ಪ್ರಗತಿಯಲ್ಲಿದೆ. |

| | | | | | |
|---|---|---|---|---|---|
| | | | | | |
| 4. | | 2020-21 | ಸರ್ಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ನರಗುಂದ ಟೌನ್. | 679.00 | ಭೂಮಿಪೂಜೆ ನೆರವೇರಿಸಿ ಕಾಮಗಾರಿ ಪ್ರಾರಂಭಿಸಬೇಕಾಗಿದೆ. |
| 5. | | 2020-21 | ಸರ್ಕಾರಿ ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ಮುಂಡರಗಿ ಟೌನ್. | 632.00 | ಭೂಮಿಪೂಜೆ ನೆರವೇರಿಸಿ ಕಾಮಗಾರಿ ಪ್ರಾರಂಭಿಸಬೇಕಾಗಿದೆ. |
| 6. | ಹಾವೇರಿ | 2018-19 | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಬ್ಯಾಡಗಿ ಟೌನ್. | 514.00 | ಕಟ್ಟಡ ಕಾಮಗಾರಿ ಪೂರ್ಣಗೊಂಡಿದ್ದು, ಸಂಪರ್ಕ ರಸ್ತೆ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದೆ. |
| 7. | ಹಾವೇರಿ | 2020-21 | ಸರ್ಕಾರಿ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ, ರಾಣೇಬೆನ್ನೂರ ಟೌನ್. | 670.00 | ಪ್ಲಿಂತ್ ಹಂತದವರೆಗೆ ಕಾಲಂ ಕಾಮಗಾರಿ ಪ್ರಗತಿಯಲ್ಲಿದೆ. |
| 8. | ಹಾವೇರಿ | 2020-21 | ಸರ್ಕಾರಿ ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ, ಅಕ್ಕಿಆಲೂರು, ಹಾನಗಲ್ ತಾಲ್ಲೂಕು. | 700.00 | ತಳಪಾಯದ ಮಣ್ಣು ಅಗೆಯುವ ಕಾಮಗಾರಿ ಪ್ರಗತಿಯಲ್ಲಿದೆ. |
| ಒಟ್ಟು | | | | 4290.00 | |

| | | |
|---|---|---|
| | ಈ ರೀತಿ ಬಿಡುಗಡೆಯಾಗಿರುವ ಅನುದಾನದಲ್ಲಿ ಕಾಮಗಾರಿಗಳ ಪ್ರಗತಿಯು ಯಾವ ಹಂತದಲ್ಲಿದೆ; | ಈ ಸಂಬಂಧವಾಗಿ, ಮಂಜೂರಾತಿ ಮೊತ್ತಕ್ಕೆ ಅನುಗುಣವಾಗಿ ಒಟ್ಟಾರೆಯಾಗಿ ಅನುದಾನವನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘಕ್ಕೆ ಬಿಡುಗಡೆ ಮಾಡಲಾಗುತ್ತಿದ್ದು, ವಿದ್ಯಾರ್ಥಿ ನಿಲಯವಾರು ಅನುದಾನ ಬಿಡುಗಡೆ ಮಾಡುತ್ತಿರುವುದಿಲ್ಲ. |

| ಇ) | ವಸತಿ ನಿಲಯಗಳ ಗುಣಮಟ್ಟ ಸುಧಾರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ರಾಜ್ಯದಲ್ಲಿ 1867 ಪರಿಶಿಷ್ಟ ಜಾತಿ ಸರ್ಕಾರಿ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿದೆ. ಸದರಿ ವಿದ್ಯಾರ್ಥಿ ನಿಲಯಗಳ ಕಟ್ಟಡದ ವಿವರಗಳು ಈ ಕೆಳಕಂಡಂತಿದೆ. |
|---|---|---|

| ಒಟ್ಟು ವಿದ್ಯಾರ್ಥಿ ನಿಲಯಗಳು | ಸ್ವಂತ ಕಟ್ಟಡ | ಬಾಡಿಗೆ/ ಬಾಡಿಗೆ ರಹಿತ ಕಟ್ಟಡ | ನಿರ್ಮಾಣ ಹಂತ | ನಿವೇಶನ ಲಭ್ಯತೆ | ನಿವೇಶನ ಗುರುತಿಸಿರುವ |
|---|---|---|---|---|---|
| 1867 | 1574 | 293 | 155 | 94 | 44 |

ನಿವೇಶನ ಲಭ್ಯವಿರುವ 94 ವಿದ್ಯಾರ್ಥಿ ನಿಲಯಗಳಿಗೆ ಪ್ರಸಕ್ತ ಸಾಲಿನಲ್ಲಿ ಅನುದಾನ ಲಭ್ಯತೆಗೆ ಅನುಗುಣವಾಗಿ ಸ್ವಂತ ಕಟ್ಟಡಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗುತ್ತಿದೆ. ಇನ್ನುಳಿದ 44 ವಿದ್ಯಾರ್ಥಿ ನಿಲಯಗಳಿಗೆ ಗುರುತಿಸಿರುವ ನಿವೇಶನಗಳನ್ನು ಇಲಾಖೆಯ ವಶಕ್ಕೆ ಪಡೆದು, ಅನುದಾನ ಲಭ್ಯತೆಯನ್ನು ಆಧರಿಸಿ ಸ್ವಂತ ಕಟ್ಟಡಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು.

ಮುಂದುವರೆದು, ಸ್ವಂತ ಕಟ್ಟಡಗಳಲ್ಲಿ ನಡೆಯುತ್ತಿರುವ ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆಗೆ ಅನುಗುಣವಾಗಿ ಹೆಚ್ಚುವರಿ ವಾಸದ ಕೊಠಡಿ/ ಶೌಚಾಲಯ/ಸ್ನಾನಗೃಹಗಳನ್ನು ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಸ್ಥಳಾವಕಾಶ ಲಭ್ಯವಿಲ್ಲದೇ ಇದ್ದಲ್ಲಿ, ಅಗತ್ಯ ಮೂಲಭೂತ ಸೌಲಭ್ಯಗಳುಳ್ಳ ಬಾಡಿಗೆ ಕಟ್ಟಡಗಳಲ್ಲಿ ಹೆಚ್ಚುವರಿ ವಿದ್ಯಾರ್ಥಿಗಳಿಗೆ ವಾಸ್ತವ್ಯ ಕಲ್ಪಿಸಲು ಕ್ರಮವಹಿಸಲಾಗುತ್ತಿದೆ.

ಸಕಇ 164 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.